# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಫೆಬ್ರವರಿ ೨೦, ೨೦೧೪ (ಫಾಲ್ಗುಣ ೧, ಶಕ ವರ್ಷ ೧೯೩೫)<br>Bangalore, Thursday, February 20, 2014 (Phalguna 1, Shaka Varsha 1935) | ಸಂಚಿಕೆ ೮<br>Issue 8 |
|---|---|---|

## ಭಾಗ ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

### ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ, ಮೈಸೂರು

**ಸಂಖ್ಯೆ: ಆಡಳಿತ/ನೇಮಕಾತಿ(ಬೆ)/1350/2014, ಮೈಸೂರು, ದಿನಾಂಕ 30.01.2014.**

**ಅಧಿಸೂಚನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಬೆರಳಚ್ಚುಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯಲ್ಲಿ ನಿಗದಿಪಡಿಸಿ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ದಿನಾಂಕ 01.02.2014ರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

**ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕ:** 22.02.2014ರ **ಅಪರಾಹ್ನ** 05.00 **ಗಂಟೆ.**

**ವಿಶೇಷ ಸೂಚನೆ:**

1. ಅರ್ಜಿಗಳು ಕಡ್ಡಾಯವಾಗಿ ನಿಗದಿತ ನಮೂನೆಯಲ್ಲಿಯೇ ಇರಬೇಕು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಚಾಲ್ತಿಯಲ್ಲಿರುವ ದೂರವಾಣಿ ಸಂಖ್ಯೆ ಹಾಗೂ ಈ-ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸಬೇಕು.
3. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಮಾರಾಟ ಮಾಡಲಾಗುವುದಿಲ್ಲ. ಆದರೆ, ನಮೂನೆಯನ್ನು ಈ ಕಛೇರಿಯ ವೆಬ್‌ಸೈಟ್ www.mys.distcourts.kar.nic.in ಇಂದ ಪ್ರತಿ ಮಾಡಿಕೊಂಡು ಬಳಸಬಹುದು.

**ಹುದ್ದೆಯ ಹೆಸರು: ಬೆರಳಚ್ಚುಗಾರರು**

**ಖಾಲಿ ಹುದ್ದೆಗಳು– 18**

**ವೇತನ ಶ್ರೇಣಿ:** 11600-200-12000-250-13000-300-14200-350–15600-400–17200-450-19000–500–21000.

**ಹುದ್ದೆಗಳ ವರ್ಗೀಕರಣ:**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಅಂ.ಅ | ಒಟ್ಟು |
|---|---|---|---|---|---|---|---|
| ಪ.ಜಾತಿ | – | 01 | 01 | 01 | 01 | – | 04 |
| ಪ.ಪಂಗಡ | – | – | 01 | – | – | – | 01 |
| ಪ್ರವರ್ಗ–1 | – | – | – | – | – | 01* | 01 |
| II – ಎ | – | – | 01 | – | 01 | – | 02 |
| II – ಬಿ | – | – | – | – | – | 01* | 01 |
| III – ಬಿ | – | – | – | – | – | 01* | 01 |
| ಸಾಮಾನ್ಯ | 02 | 02 | 02 | 01 | – | 01** | 08 |
| **ಒಟ್ಟು** | **02** | **03** | **05** | **02** | **02** | **04** | **18** |

* **ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ ಅಭ್ಯರ್ಥಿ** (Blind & Low Vision)

** **ಶ್ರವಣದೋಷವುಳ್ಳ ಅಭ್ಯರ್ಥಿ** (Hearing Impaired)

**ವಿದ್ಯಾರ್ಹತೆಃ** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಹಿರಿಯ ಶ್ರೇಣಿ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನ ಃ** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿ ಃ** ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**ವಿಶೇಷ ಟಿಪ್ಪಣಿಃ** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ದೃಷ್ಟಿಮಾಂದ್ಯ / ದೃಷ್ಟಿದೋಷವುಳ್ಳ (Blind & Low Vision) ಹಾಗೂ ಶ್ರವಣದೋಷವುಳ್ಳ ಅಭ್ಯರ್ಥಿಗಳು (Hearing Impaired) ಲಭ್ಯವಿಲ್ಲದೇ ಇದ್ದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ, ಗುರುತಿಸಲಾದ ಇತರೇ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಅಂಗವಿಕಲ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ, ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಂಗವಿಕಲ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು**

ಅ. **ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.**

ಆ. **ಗರಿಷ್ಠ ವಯೋಮಿತಿ**

| | |
|---|---|
| **ಸಾಮಾನ್ಯ ವರ್ಗ** | **35 ವರ್ಷ** |
| **2ಎ, 2ಬಿ, 3ಎ, 3ಬಿ** | **38 ವರ್ಷ** |
| **ಪ.ಜಾತಿ, ಪ.ಪಂಗಡ, ಪ್ರವರ್ಗ – 1** | **40 ವರ್ಷ** |

**ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.**

**ವಯೋಮಿತಿ ಸಡಿಲಿಕೆಃ**

**ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.**

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.
2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 03 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.

4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೂ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಪರಿವೀಕ್ಷಣಾ ಅವಧಿ:**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನ:**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನ:**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು – 570 005"**, ಇವರಿಗೆ ದಿನಾಂಕ: 22.02.2014ರ ಅಪರಾಹ್ನ 05.00 ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳು:**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ದೃಢೀಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಹೊರತುಪಡಿಸಿದರೂ ಸಹ ಅಭ್ಯರ್ಥಿಯ ಅರ್ಜಿಯು ಸಿಂಧುವಾಗುವಂತಿದ್ದಲ್ಲಿ ಮಾತ್ರ ಅಂತಹ ಅರ್ಜಿಗಳನ್ನು ಪುರಸ್ಕರಿಸಲಾಗುವುದು, ಇಲ್ಲದಿದ್ದಲ್ಲಿ ತಿರಸ್ಕರಿಸಲಾಗುವುದು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನಿಗದಿತ ಸ್ಥಳದಲ್ಲಿ ಅಂಟಿಸಿರಬೇಕು.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ–Iರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ/96/ಸೇನನಿ/2005, ದಿನಾಂಕ: 10.08.2005ರ ಪ್ರಕಾರ ನಿಗದಿತ ನಮೂನೆ – 2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.
6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2ರ ಜೊತೆ ನಮೂನೆ – 1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.

8. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆಃಸಿಆಸುಇ/115/ಸೇನನಿ/2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.

9. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ/44/ಸೇನನಿ/2001ರ ದಿನಾಂಕ 27.07.2001ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

10. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.

11. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.

12. ಸ್ವಯಂ ವಿಳಾಸವಿರುವ ರೂ.5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆಃ**

ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಹಾಗೂ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನವನ್ನು ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಕೆ.ಎಸ್. ಮುದಗಲ್**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು.

**ಅರ್ಜಿ ನಮೂನೆ**

ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು.

**ರವರಿಗೆ**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು.**

ದಿನಾಂಕಃ 30.01.2014ರ ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಆಡಳಿತ/ನೇಮಕಾತಿ/ಬೆ/1350/2014 ಮೇರೆಗೆ ನಾನು <u>ಬೆರಳಚ್ಚುಗಾರರ</u> ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |
| 6 | ಲಿಂಗ | ಪುರುಷ | ಮಹಿಳೆ | |
| | | | | |
| 7 | ರಾಷ್ಟ್ರೀಯತೆ | | | |

| | | | | | | |
|---|---|---|---|---|---|---|
| 8 | ಧರ್ಮ ಮತ್ತು ಜಾತಿ | | | | | |
| 9 | ವೈವಾಹಿಕ ಸ್ಥಿತಿ | ವಿವಾಹಿತ | | ಅವಿವಾಹಿತ | | |
| | | | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | ಹೌದು | | ಇಲ್ಲ | | |
| | | | | | | |
| 12 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | ಹೌದು | | ಇಲ್ಲ | | |
| | | | | | | |
| 13 | ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಸಾಮಾನ್ಯ | ಪ.ಜಾತಿ | ಪ.ಪಂಗಡ | ಪ್ರವರ್ಗ–1 | |
| | | | | | | |
| | | 2ಎ | 2ಬಿ | 3ಎ | 3ಬಿ | |
| | | | | | | |
| 14 | ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ?<br>(ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು) | ಗ್ರಾಮೀಣ | ಕ.ಮಾ.ಅ | ಮಾ.ಸೈ | ಯೋ.ನಿ.ಅ. | ಅಂ.ವಿ |
| | | | | | | |
| 15 | ವಿದ್ಯಾರ್ಹತೆಃ<br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | ತೇರ್ಗಡೆಯಾದ ತಿಂಗಳು ಮತ್ತು ವರ್ಷ | | ಗರಿಷ್ಠ ಅಂಕಗಳು | ಗಳಿಸಿದ ಅಂಕಗಳು | |
| | ಎಸ್. ಎಸ್. ಎಲ್. ಸಿ. | | | | | |
| | ಕನ್ನಡ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| | ಆಂಗ್ಲ ಬೆರಳಚ್ಚು (ಹಿರಿಯ ಶ್ರೇಣಿ) | | | | | |
| 16 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ? | ಹೌದು | | ಇಲ್ಲ | | |
| | | | | | | |
| 17 | ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಿದ್ದೀರಾ? | ಹೌದು | | ಇಲ್ಲ | | |
| | | | | | | |
| 18 | ಅಭ್ಯರ್ಥಿಯ ಖಾಯಂ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ. | | | | | |
| 19 | ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ. | | | | | |
| 20 | ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರಾ? | | | | | |

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

**ಅಭ್ಯರ್ಥಿಯ ಸಹಿ**

**ಸ್ಥಳಃ**

**ದಿನಾಂಕಃ**

**PR.13**
**SC.10**

## ಜಿಲ್ಲಾಧಿಕಾರಿಯವರ ಕಛೇರಿ ತುಮಕೂರು ಜಿಲ್ಲೆ.

**ನಂ.ವಿಎಎಸ್.ಸಿಆರ್:266/10-11, ತುಮಕೂರು, ದಿನಾಂಕ: 17.01.2014**

**ಅಧಿಕೃತ ಜ್ಞಾಪನ**

**ವಿಷಯ ಃ** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು:-

**ಉಲ್ಲೇಖಃ-**
1. ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 128 ಸೆನೆನಿ 2006, ದಿನಾಂಕ:-01.08.2009
2. ಸರ್ಕಾರದ ಪತ್ರ ಸಂಖ್ಯೆ: ಕಂಇ 04 ಬಿಎಸ್‌ಸಿ 2011, ದಿನಾಂಕ:- 25.02.2011
3. ಸರ್ಕಾರದ ಆದೇಶ ಸಂಖ್ಯೆ: ಕಂಇ 33 ಡಿಎಸ್‌ಪಿ 2012, ದಿನಾಂಕ:-05.06.2012
4. ಸರ್ಕಾರದ ಸುತ್ತೋಲೆ ಸಂಖ್ಯೆ: ಕಂಇ 100 ಬಿಎಸ್‌ಸಿ 2011, ದಿನಾಂಕ:-29.06.2012
5. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್ 266/10-11, ದಿನಾಂಕ:- 30.07.2012
6. ಈ ಕಛೇರಿಯ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:-07.08.2012
7. ಈ ಕಛೇರಿಯ ಪ್ರಕಟಣೆ ಸಂಖ್ಯೆ: ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:-26.08.2013 ಮತ್ತು 04.09.2013
8. ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:-20.09.2013 (ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ(1)(2) ಮತ್ತು (4)ರ ಅನ್ವಯ ಹಾಗೂ ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment )(Amendment) ನಿಯಮಗಳು, 2009ರಂತೆ ಉಲ್ಲೇಖ(6)ರ ತಿದ್ದುಪಡಿ ಅಧಿಸೂಚನೆಯಲ್ಲಿ ತಿಳಿಸಿರುವಂತೆ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಉಲ್ಲೇಖ(6) ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾದ ದಿನಾಂಕದಂದು ಖಾಲಿ ಇದ್ದ 81 ಗ್ರಾಮಲೆಕ್ಕಿಗರ ಹುದ್ದೆ ಹಾಗೂ ಸರ್ಕಾರ ಉಲ್ಲೇಖ(3)ರ ಆದೇಶದಲ್ಲಿ ಹೊಸ ನಾಡ ಕಛೇರಿಗಳಿಗೆ ಸೃಜಿಸಲಾಗಿರುವ 20 ಗ್ರಾಮಲೆಕ್ಕಿಗರ ಹುದ್ದೆಗಳು ಸೇರಿ ಒಟ್ಟು 101 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಳ್ಳಲಾಗಿದೆ.

ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ 101 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅನ್‌ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 29.09.2012ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಯನ್ನು ಪರಿಶೀಲಿಸಲಾಗಿದೆ. ಅಂಗವಿಕಲ ಅಭ್ಯರ್ಥಿಗಳಿಗೆ ಸಂಬಧಿಸಿದಂತೆ ಒಬ್ಬ ಅಭ್ಯರ್ಥಿಯು 1:5 ರಲ್ಲಿ ಲಭ್ಯರಾಗದ ಕಾರಣ Ranking list ನಿಂದ ಮೆರಿಟ್‌ನಂತೆ ಮೂಲ ದಾಖಲೆ ಪರಿಶೀಲನೆಗೆ ಒಳಪಡಿಸಿದ್ದು, ನಂತರದಲ್ಲಿ ದಿನಾಂಕ:-26.08.2013ರಂದು ಪ್ರಕಟಣೆಯೊಂದಿಗೆ 1:1 Provisional Selection list & waiting list ಅನ್ನು ಹೊರಡಿಸಿ ದಿನಾಂಕ.26.08.2013 ರಿಂದ 02.09.2013ರ ವರೆಗೆ ಅಭ್ಯರ್ಥಿಗಳಿಂದ ಆಕ್ಷೇಪಣೆ / ತಕರಾರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ದಿನಾಂಕ.26.08.2013 ರಿಂದ 02.09.2013ರ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ / ತಕರಾರು ಕುರಿತು ಪರಿಶೀಲಿಸಿ ವಿಲೇವಾರಿ ಮಾಡಲಾಗಿದೆ. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 101 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿಸಿರಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ವೆಬ್ ಸೈಟ್ www.tumkur.nic.in ರಲ್ಲಿ ಉಲ್ಲೇಖ(8)ರ ಅಧಿಸೂಚನೆಯೊಂದಿಗೆ ಪ್ರಚುರಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ ಮೂಲ ದಾಖಲೆಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಮೂಲ ದಾಖಲೆಗಳ ಪರಿಶೀಲನಾ ವರದಿ ಬಂದಿರುವ ಹಾಗೂ ಪೂರ್ಣ ಪ್ರಮಾಣದಲ್ಲಿ ನೈಜತಾ ವರದಿ ಬಂದಿರುವ ಈ ಕೆಳಕಾಣಿಸಿರುವ ಅಭ್ಯರ್ಥಿಗಳನ್ನು ತುಮಕೂರು ಜಿಲ್ಲಾ ಕಂಧಾಯ ಘಟಕದಲ್ಲಿನ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಲಾದ ಅಧಿಸೂಚನೆ / ಪ್ರಕಟಣೆಗಳ ವಿರುದ್ಧ ರಾಜ್ಯದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಪಿಟಿಷನ್ ನಂ.41070-41071ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಮುಂದಿನ ಆದೇಶಕ್ಕೆ ಈ ನೇಮಕಾತಿ ಆದೇಶ ಒಳಪಟ್ಟು ನೇಮಕಾತಿ ಮಾಡಲಾಗಿದೆ.

ಈ ಆದೇಶದಲ್ಲಿನ ಕ್ರಮ ಸಂಖ್ಯೆ: 01 ರಿಂದ 05 ರಲ್ಲಿ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ.11600–200–12000–250–13000–300–14200–350–15600–400–17200–450–19000–500–21000 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | ಕುಮಾರಿ:ಸುರೇಖ ಕಾಡಪ್ಪ ಸಂತಿ ಬಿನ್ ಕಾಡಪ್ಪ, ಶೇಗುಣಸಿ ಗ್ರಾಮ ಮತ್ತು ಅಂಚೆ ,ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ–591220 | ಗಂಜಲಗುಂಟೆ ವೃತ್ತ, ಕಸಬಾ ಹೋಬಳಿ, ಮಧುಗಿರಿ ತಾಲ್ಲೂಕು. | ತಹಶೀಲ್ದಾರರ ಕಛೇರಿ, ಮಧುಗಿರಿ ತಾಲ್ಲೂಕು. |
| 2 | ಕುಮಾರಿ:ರೇಣುಕಾ ಬಂಡಿಕೇರಿ ಬಿನ್ ನಾಗಪ್ಪ, ಹುಚ್ಚೇಶ್ವರ ದೇವಸ್ಥಾನ ಹತ್ತಿರ, ಕಮತಗಿ ಗ್ರಾಮ ಮತ್ತು ಅಂಚೆ, ಅಮೀನಗಡ ಹೋಬಳಿ, ಹುನಗುಂದ ತಾಲ್ಲೂಕು, ಬಾಗಲಕೋಟೆ ಜಿಲ್ಲೆ–587120 | ನಾಡ ಕಛೇರಿ, ಗೌಡಗೆರೆ ಹೋಬಳಿ, ಶಿರಾ ತಾಲ್ಲೂಕು. | ತಹಶೀಲ್ದಾರರ ಕಛೇರಿ, ಶಿರಾ ತಾಲ್ಲೂಕು . |
| 3 | ಶ್ರೀ ನವೀನ್ ಕುಮಾರ್ ಹೆಚ್.ಎನ್ ಬಿನ್ ನಾಗರಾಜು ಹೊಸಹಳ್ಳಿ ಗ್ರಾಮ , ಸಾಸಲು ಹೋಬಳಿ, ದೊಡ್ಡಬಳ್ಳಾಪುರ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ–561203 | ಚಿಕ್ಕಬಿದರೆ ವೃತ್ತ, ಹುಳಿಯೂರು ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು | ತಹಶೀಲ್ದಾರರ ಕಛೇರಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. |
| 4 | ಕುಮಾರಿ:ಕೌಸರಭಿ ಕರಿಶಾಬು ಬಿನ್ ಅಬ್ದುಲ್ ಕರಿಶಾಬು, ಸಪ್ತಸಾಗರ ಗ್ರಾಮ, ಅಥಣಿ ತಾಲ್ಲೂಕು, ಬೆಳಗಾಂ ಜಿಲ್ಲೆ–591304 | ಭೂಮಿ ಕೇಂದ್ರ, ತಾಲ್ಲೂಕು ಕಛೇರಿ, ಶಿರಾ ತಾಲ್ಲೂಕು. | ತಹಶೀಲ್ದಾರರ ಕಛೇರಿ, ಶಿರಾ ತಾಲ್ಲೂಕು. |
| 5 | ಶ್ರೀ ಪವನ ಕುಮಾರ್ .ಸಿ ಬಿನ್ ಚಿನ್ನರಾಜು , ಚಿಕ್ಕವಳ್ಳಿ, ಹೊಳವನಹಳ್ಳಿ ಹೋಬಳಿ, ತೀತಾ ಅಂಚೆ , ಕೊರಟಗೆರೆ ತಾಲ್ಲೂಕು, ತುಮಕೂರು ಜಿಲ್ಲೆ–572121 | ದಬ್ಬೇಘಟ್ಟ ವೃತ್ತ, ದಬ್ಬೇಘಟ್ಟ ಹೋಬಳಿ, ತುರುವೇಕೆರೆ ತಾಲ್ಲೂಕು | ತಹಶೀಲ್ದಾರರ ಕಛೇರಿ, ತುರುವೇಕೆರೆ ತಾಲ್ಲೂಕು |

**ಷರತ್ತುಗಳು:**

01. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರ್,ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

02. ಅಭ್ಯರ್ಥಿಯು ತನ್ನ ಹುಟ್ಟಿಧ ದಿನಾಂಕ , ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವು ಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.

03. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್(2)ರೆವಿನ್ಯೂ ಲೋಯರ್(3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ಧ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು. ) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರಧಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ)ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದುಹಾಕಲಾಗುವುದು.

04. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದು ಹಾಕಲಾಗುವು ದು.

05. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ " ಸ್ವೀಕರಿಸತಕ್ಕದ್ದು.

06. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.

07. ಸರ್ಕಾರದ ಸುತ್ತೋಲೆ ಸಂ. ಕಂಇ 54 ಬಿಎಸ್‌ಸಿ 2007 ದಿನಾಂಕ 27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಟ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

08. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂಧ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವು ದು.

09. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ (ಸಿಸಿಎ)ನಿಯಮಾವಳಿ 1957 ಕರ್ನಾಟಕ ನಾಗರಿಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

10. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.

11. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000–00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

12. ಅಭ್ಯರ್ಥಿಯು ಇಲಾಖೆಯಿಂಧ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

14. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ– ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

15. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.

16. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**PR.7**
**SC25**

**ಕೆ.ಎಸ್.ಸತ್ಯಮೂರ್ತಿ**
ಜಿಲ್ಲಾಧಿಕಾರಿ, ತುಮಕೂರು.

## ಜಿಲ್ಲಾಧಿಕಾರಿಯವರ ಕಛೇರಿ ತುಮಕೂರು ಜಿಲ್ಲೆ.

**ನಂ.ವಿಎಎಸ್.ಸಿಆರ್:266/10–11, ತುಮಕೂರು, ದಿನಾಂಕ: 20.12.2013**

**ಅಧಿಕೃತ ಜ್ಞಾಪನ**

**ವಿಷಯ :** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು:–

**ಉಲ್ಲೇಖ:–** 1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 128 ಸೆನೆನಿ 2006, ದಿನಾಂಕ:–01.08.2009

2. ಸರ್ಕಾರದ ಪತ್ರ ಸಂಖ್ಯೆ. ಕಂಇ 04 ಬಿಎಸ್‌ಸಿ 2011, ದಿನಾಂಕ:– 25.02.2011

3. ಸರ್ಕಾರದ ಆದೇಶ ಸಂಖ್ಯೆ. ಕಂಇ 33 ಡಿಎಸ್‌ಪಿ 2012, ದಿನಾಂಕ:–05.06.2012

4. ಸರ್ಕಾರದ ಸುತ್ತೋಲೆ ಸಂಖ್ಯೆ. ಕಂಇ 100 ಬಿಎಸ್‌ಸಿ 2011, ದಿನಾಂಕ:–29.06.2012
5. ಈ ಕಛೇರಿಯ ಆಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10–11, ದಿನಾಂಕ:–30.07.2012
6. ಈ ಕಛೇರಿಯ ತಿದ್ದುಪಡಿ ಅಧಿಸೂಚನೆ ಸಂಖ್ಯೆ. ಗ್ರಾ.ಲೆ ಸಿಬ್ಬಂದಿ.ಸಿಆರ್. 266/10–11, ದಿನಾಂಕ:–07.08.2012
7. ಈ ಕಛೇರಿಯ ಪ್ರಕಟಣೆ ಸಂಖ್ಯೆ. ಗ್ರಾ.ಲೆ ಸಿಬ್ಬಂದಿ.ಸಿಆರ್. 266/10–11, ದಿನಾಂಕ:–26.08.2013 ಮತ್ತು 04.09.2013
8. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10–11, ದಿನಾಂಕ:–20.09.2013 (ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ(1)(2) ಮತ್ತು (4)ರ ಅನ್ವಯ ಹಾಗೂ ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment )(Amendment) ನಿಯಮಗಳು, 2009ರಂತೆ ಉಲ್ಲೇಖ(6)ರ ತಿದ್ದುಪಡಿ ಅಧಿಸೂಚನೆಯಲ್ಲಿ ತಿಳಿಸಿರುವಂತೆ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಉಲ್ಲೇಖ(6) ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾದ ದಿನಾಂಕದಂದು ಖಾಲಿ ಇದ್ದ 81 ಗ್ರಾಮಲೆಕ್ಕಿಗರ ಹುದ್ದೆ ಹಾಗೂ ಸರ್ಕಾರ ಉಲ್ಲೇಖ(3)ರ ಆದೇಶದಲ್ಲಿ ಹೊಸ ನಾಡ ಕಛೇರಿಗಳಿಗೆ ಸೃಜಿಸಲಾಗಿರುವ 20 ಗ್ರಾಮಲೆಕ್ಕಿಗರ ಹುದ್ದೆಗಳು ಸೇರಿ ಒಟ್ಟು 101 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಳ್ಳಲಾಗಿದೆ.

ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ 101 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅನ್‌ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 29.09.2012ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಯನ್ನು ಪರಿಶೀಲಿಸಲಾಗಿದೆ. ಅಂಗವಿಕಲ ಅಭ್ಯರ್ಥಿಗಳಿಗೆ ಸಂಬಧಿಸಿದಂತೆ ಒಬ್ಬ ಅಭ್ಯರ್ಥಿಯು 1:5 ರಲ್ಲಿ ಲಭ್ಯರಾಗದ ಕಾರಣ Ranking list ನಿಂದ ಮೆರಿಟ್ ನಂತೆ ಮೂಲ ದಾಖಲೆ ಪರಿಶೀಲನೆಗೆ ಒಳಪಡಿಸಿದ್ದು, ನಂತರದಲ್ಲಿ ದಿನಾಂಕ:–26.08.20013ರಂದು ಪ್ರಕಟಣೆಯೊಂದಿಗೆ 1:1 Provisional Selection list & waiting list ಅನ್ನು ಹೊರಡಿಸಿ ದಿನಾಂಕ.26.08.2013 ರಿಂದ 02.09.2013ರ ವರೆಗೆ ಅಭ್ಯರ್ಥಿಗಳಿಂಧ ಆಕ್ಷೇಪಣೆ / ತಕರಾರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ದಿನಾಂಕ.26.08.2013 ರಿಂದ 02.09.2013ರ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ / ತಕರಾರು ಕುರಿತು ಪರಿಶೀಲಿಸಿ ವಿಲೇವಾರಿ ಮಾಡಲಾಗಿದೆ. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 101 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿಸಿರಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ವೆಬ್ ಸೈಟ್ **www.tumkur.nic.in** ರಲ್ಲಿ ಉಲ್ಲೇಖ(8)ರ ಅಧಿಸೂಚನೆಯೊಂದಿಗೆ ಪ್ರಚುರಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳ ಫೈಕಿ ಮೂಲ ದಾಖಲೆಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಮೂಲ ಧಾಖಲೆಗಳ ಪರಿಶೀಲನಾ ವರದಿ ಬಂದಿರುವ ಹಾಗೂ ಪೂರ್ಣ ಪ್ರಮಾಣದಲ್ಲಿ ನೈಜತಾ ವರದಿ ಬಂದಿರುವ ಈ ಕೆಳಕಾಣಿಸಿರುವ ಅಭ್ಯರ್ಥಿಗಳನ್ನು ತುಮಕೂರು ಜಿಲ್ಲಾ ಕಂಧಾಯ ಘಟಕದಲ್ಲಿನ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಲಾದ ಅಧಿಸೂಚನೆ / ಪ್ರಕಟಣೆಗಳ ವಿರುದ್ಧ ರಾಜ್ಯದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಪಿಟಿಷನ್ ನಂ.41070–41071ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಮುಂದಿನ ಆದೇಶಕ್ಕೆ ಈ ನೇಮಕಾತಿ ಆದೇಶ ಒಳಪಟ್ಟು ನೇಮಕಾತಿ ಮಾಡಲಾಗಿದೆ.

ಈ ಆದೇಶದಲ್ಲಿನ ಕ್ರಮ ಸಂಖ್ಯೆ 01 ರಿಂದ 04 ರಲ್ಲಿ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ.11600–200–12000–250–13000–300–14200–350–15600–400–17200–450–19000–500–21000 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | ಶ್ರೀ ಸುರೇಶ್ ಬಿನ್ ದುಂಡಪ್ಪ ಓಲೇಕಾರ, ವಿನಾಯಕ ನಗರ, ನಿಡಗುಂಡಿ ಅಂಚೆ, ಬಸವನ ಬಾಗೇವಾಡಿ ತಾಲ್ಲೂಕು , ಬಿಜಾಪು ರ –586213 | ರ‍್ಯಾಪ್ಟೆ ವೃತ್ತ, ನಾಗಲಮಡಿಕೆ ಹೋಬಳಿ, ಪಾವಗಡ ತಾಲ್ಲೂಕು | ತಾಲ್ಲೂಕು ಕಛೇರಿ ಪಾವಗಡ ತಾಲ್ಲೂಕು . |
| 2 | ಕುಮಾರಿ ಸಾವಿತ್ರಮ್ಮ ಬಿನ್ ರಂಗಪ್ಪ, ಮೈಲನಹಳ್ಳಿ ಕೋಪ್ಪಲು (ಅಂಚೆ), ಅರಸೀಕೆರೆ ತಾಲ್ಲೂಕು ಹಾಸನ ಜಿಲ್ಲೆ–573103 | ಅರಸೀಕೆರೆ ವೃತ್ತ, ನಿಡಗಲ್ ಹೋಬಳಿ ಪಾವಗಡ ತಾಲ್ಲೂಕು | ತಾಲ್ಲೂಕು ಕಛೇರಿ ಪಾವಗಡ ತಾಲ್ಲೂಕು . |
| 3 | ಕುಮಾರಿ ಬೀ ಬೀ ಹಾಜಿರಾ ಬಿನ್ ನಿಸಾರ್ ಅಹ್ಮದ್ ನಂ.117, ಚಾಮುಂಡಿ ನಗರ , ಆರ್.ಟಿ ನಗರ ಬೆಂಗಳೂರು ನಗರ ಜಿಲ್ಲೆ –560032 | ಕೆ.ಟಿ.ಹಳ್ಳಿ ವೃತ್ತ, ನಿಡಗಲ್ ಹೋಬಳಿ, ಪಾವಗಡ ತಾಲ್ಲೂಕು | ತಾಲ್ಲೂಕು ಕಛೇರಿ ಪಾವಗಡ ತಾಲ್ಲೂಕು . |

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 4 | ಕುಮಾರಿ, ನಾಗರತ್ನ ಟಿ.ಆರ್. ಬಿನ್ ರಾಜಶೇಖರ, ರೆಗ್ಗಾನ್ ರೋಲಿಂಗ್ ಮಿಲ್ ಹತ್ತಿರ, 2ನೇ ಕ್ರಾಸ್, ಉಪ್ಪಾರಹಳ್ಳಿ, ತುಮಕೂರು ನಗರ –572102 | ಕೋಟಗುಡ್ಡ ವೃತ್ತ, ನಿಡಗಲ್ ಹೋಬಳಿ, ಪಾವಗಡ ತಾಲ್ಲೂಕು | ತಾಲ್ಲೂಕು ಕಛೇರಿ ಪಾವಗಡ ತಾಲ್ಲೂಕು . |

**ಷರತ್ತುಗಳುಃ**

01. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರ್,ರವರವ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

02. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ , ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಟ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವು ಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.

03. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್(2)ರೆವಿನ್ಯೂ ಲೋಯರ್(3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು. ) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರಧಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ)ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದುಹಾಕಲಾಗುವು ದು.

04. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವು ದು ಕಂಡು ಬಂದಲ್ಲಿ ಅವರನ್ನು ಯಾವು ದೇ ಸಮಯದಲ್ಲಿ ಯಾವು ದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದು ಹಾಕಲಾಗುವು ದು.

05. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ " ಸ್ವೀಕರಿಸತಕ್ಕದ್ದು.

06. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.

07. ಸರ್ಕಾರದ ಸುತ್ತೋಲೆ ಸಂ. ಕಂಇ 54 ಬಿಎಸ್‌ಸಿ 2007 ದಿನಾಂಕ 27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಟ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

08. ಅಭ್ಯರ್ಥಿಗಳು ಉಧ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂಧ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವು ದು.

09. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ (ಸಿಸಿಎ)ನಿಯಮಾವಳಿ 1957 ಕರ್ನಾಟಕ ನಾಗರಿಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

10. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವು ದು.

11. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವು ದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000–00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

12. ಅಭ್ಯರ್ಥಿಯು ಇಲಾಖೆಯಿಂಧ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.
13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.
14. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ– ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
15. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂಧರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುಧೇ ಭತ್ಯೆಯನ್ನು ನೀಡಲಾಗುವುದಿಲ್ಲ.
16. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**ಕೆ.ಎಸ್.ಸತ್ಯಮೂರ್ತಿ**
ಜಿಲ್ಲಾಧಿಕಾರಿ, ತುಮಕೂರು.

**PR.10**
**SC.25**

**ಜಿಲ್ಲಾಧಿಕಾರಿಯವರ ಕಛೇರಿ ತುಮಕೂರು ಜಿಲ್ಲೆ.**

**ನಂ.ವಿಎಎಸ್.ಸಿಆರ್:266/10-11, ತುಮಕೂರು, ದಿನಾಂಕ: 28.12.2013**

**ಅಧಿಕೃತ ಜ್ಞಾಪನ**

**ವಿಷಯ :** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು:–

**ಉಲ್ಲೇಖ:–**
1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 128 ಸೇನೆನಿ 2006, ದಿನಾಂಕ;–01.08.2009
2. ಸರ್ಕಾರದ ಪತ್ರ ಸಂಖ್ಯೆ.ಕಂಇ 04 ಬಿಎಸ್‌ಸಿ 2011, ದಿನಾಂಕ:– 25.02.2011
3. ಸರ್ಕಾರದ ಆದೇಶ ಸಂಖ್ಯೆ ಕಂಇ 33 ಡಿಎಸ್‌ಪಿ 2012, ದಿನಾಂಕ:–05.06.2012
4. ಪರ್ಕಾರದ ಸುತ್ತೋಲೆ ಸಂಖ್ಯೆ ಕಂಇ 100 ಬಿಎಸ್‌ಸಿ 2011, ದಿನಾಂಕ:–29.06.2012
5. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:–30.07.2012
6. ಈ ಕಛೇರಿಯ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:–07.08.2012
7. ಈ ಕಛೇರಿಯ ಪ್ರಕಟಣೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:–26.08.2013 ಮತ್ತು 04.09.2013
8. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ.ಲೆ ಸಿಬ್ಬಂದಿ.ಸಿಆರ್. 266/10-11, ದಿನಾಂಕ:–20.09.2013 (ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ(1)(2) ಮತ್ತು (4)ರ ಅನ್ವಯ ಹಾಗೂ ಕರ್ನಾಟಕ ನಾಗರಿಕ ಸೇವೆ (Revenue Sub ordinate Branch) (Cadre and Recruitment) (Amendment) ನಿಯಮಗಳು, 2009ರಂತೆ ಉಲ್ಲೇಖ(6)ರ ತಿದ್ದುಪಡಿ ಅಧಿಸೂಚನೆಯಲ್ಲಿ ತಿಳಿಸಿರುವಂತೆ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಉಲ್ಲೇಖ(6) ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾದ ದಿನಾಂಕದಂದು ಖಾಲಿ ಇದ್ದ 81 ಗ್ರಾಮಲೆಕ್ಕಿಗರ ಹುದ್ದೆ ಹಾಗೂ ಸರ್ಕಾರ ಉಲ್ಲೇಖ(3)ರ ಆದೇಶದಲ್ಲಿ ಹೊಸ ನಾಡ ಕಛೇರಿಗಳಿಗೆ ಸೃಜಿಸಲಾಗಿರುವ 20 ಗ್ರಾಮಲೆಕ್ಕಿಗರ ಹುದ್ದೆಗಳು ಸೇರಿ ಒಟ್ಟು 101 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಳ್ಳಲಾಗಿದೆ.

ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ 101 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅನ್‌ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 29.09.2012ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಯನ್ನು ಪರಿಶೀಲಿಸಲಾಗಿದೆ. ಅಂಗವಿಕಲ ಅಭ್ಯರ್ಥಿಗಳಿಗೆ ಸಂಬಧಿಸಿದಂತೆ ಒಬ್ಬ ಅಭ್ಯರ್ಥಿಯು 1:5 ರಲ್ಲಿ ಲಭ್ಯರಾಗದ ಕಾರಣ Ranking list ನಿಂದ ಮೆರಿಟ್ ನಂತೆ ಮೂಲ ದಾಖಲೆ ಪರಿಶೀಲನೆಗೆ ಒಳಪಡಿಸಿದ್ದು, ನಂತರದಲ್ಲಿ ದಿನಾಂಕ:–26.08.20013ರಂದು ಪ್ರಕಟಣೆಯೊಂದಿಗೆ 1:1 Provisional Selection list & waiting list ಅನ್ನು ಹೊರಡಿಸಿ ದಿನಾಂಕ.26.08.2013 ರಿಂದ 02.09.2013ರ ವರೆಗೆ ಅಭ್ಯರ್ಥಿಗಳಿಂದ ಆಕ್ಷೇಪಣೆ / ತಕರಾರು ಇದ್ದಲ್ಲಿ

ಸಲ್ಲಿಸುವಂತೆ ತಿಳಿಸಲಾಗಿತ್ತು. ದಿನಾಂಕ.26.08.2013 ರಿಂದ 02.09.2013ರ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ / ತಕರಾರು ಕುರಿತು ಪರಿಶೀಲಿಸಿ ವಿಲೇವಾರಿ ಮಾಡಲಾಗಿದೆ. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 101 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿಸಿರಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ವೆಬ್ ಸೈಟ್ **www.tumkur.nic.in** ರಲ್ಲಿ ಉಲ್ಲೇಖ(8)ರ ಅಧಿಸೂಚನೆಯೊಂದಿಗೆ ಪ್ರಚುರಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ ಮೂಲ ದಾಖಲೆಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಮೂಲ ಧಾಖಲೆಗಳ ಪರಿಶೀಲನಾ ವರದಿ ಬಂದಿರುವ ಹಾಗೂ ಪೂರ್ಣ ಪ್ರಮಾಣದಲ್ಲಿ ನೈಜತಾ ವರದಿ ಬಂದಿರುವ ಈ ಕೆಳಕಾಣಿಸಿರುವ ಅಭ್ಯರ್ಥಿಗಳನ್ನು ತುಮಕೂರು ಜಿಲ್ಲಾ ಕಂಧಾಯ ಘಟಕದಲ್ಲಿನ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಲಾದ ಅಧಿಸೂಚನೆ / ಪ್ರಕಟಣೆಗಳ ವಿರುದ್ಧ ರಾಜ್ಯದ ಮಾನ್ಯ ಉಚ್ಚ ನ್ಯಾಯಾಲಯದಲ್ಲಿ ದಾಖಲಾಗಿರುವ ರಿಟ್ ಪಿಟಿಷನ್ ನಂ.41070–41071ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಮುಂದಿನ ಆದೇಶಕ್ಕೆ ಈ ನೇಮಕಾತಿ ಆದೇಶ ಒಳಪಟ್ಟು ನೇಮಕಾತಿ ಮಾಡಲಾಗಿದೆ.

ಈ ಆದೇಶದಲ್ಲಿನ ಕ್ರಮ ಸಂಖ್ಯೆ 01 ರಿಂದ 03 ರಲ್ಲಿ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ.11600–200–12000–250–13000–300–14200–350–15600–400–17200–450–19000–500–21000 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | ಶ್ರೀಮತಿ ಲತಾ ಡಿ.ಬಿ ಬಿನ್ ಭೈರಪ್ಪ, ರಾಮ ಮಂದಿರ ರಸ್ತೆ, ಬುಕ್ಕಾಪಟ್ಟಣ ಗ್ರಾಮ & ಅಂಚೆ ಶಿರಾ ತಾಲ್ಲೂಕು–572115 | ದೊಡ್ಡೇರಿ ವೃತ್ತ, ದೊಡ್ಡೇರಿ ಹೋಬಳಿ, ಮಧುಗಿರಿ ತಾಲ್ಲೂಕು | ತಾಲ್ಲೂಕು ಕಛೇರಿ, ಮಧುಗಿರಿ ತಾಲ್ಲೂಕು |
| 2 | ಶ್ರೀ ಶಾದಿಕ್ ಅಹ್ಮದ್ ಪಾಶ್ಚಾಪೂರ ಬಿನ್ ಗೌಸ್ ಮೊದ್ದೀನ್ ಪಾಶ್ಚಾಪೂರ, ತೋಲಗಿ ಗ್ರಾಮ, ತೋಲಗಿ ಹೋಬಳಿ, ಖಾನಾಪೂರ ತಾಲ್ಲೂಕು, ಬೆಳಗಾವಿ ಜಿಲ್ಲೆ.–591112 | ನಾಡ ಕಛೇರಿ, ಕಳ್ಳಂಬೆಳ್ಳ ಹೋಬಳಿ , ಶಿರಾ ತಾಲ್ಲೂಕು | ತಾಲ್ಲೂಕು ಕಛೇರಿ, ಶಿರಾ ತಾಲ್ಲೂಕು |
| 3 | ಶ್ರೀಮತಿ ವೀಣಾ ಆರ್.ವೈ ಬಿನ್ ಯೋಗಮೂರ್ತಿ ಆರ್.ಎಸ್., ರಾಯಸಂದ್ರ, ದಂಡಿನಶಿವರ ಹೋಬಳಿ, ತುರುವೇಕೆರೆ ತಾಲ್ಲೂಕು | ನಾಡ ಕಛೇರಿ, ಕಂದಿಕೆರೆ ಹೋಬಳಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು | ತಾಲ್ಲೂಕು ಕಛೇರಿ, ಚಿಕ್ಕನಾಯಕನಹಳ್ಳಿ ತಾಲ್ಲೂಕು. |

**ಷರತ್ತುಗಳು:**

01. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರ್,ರವರವ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.

02. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ , ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಟ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವು ಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.

03. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1) ಅಕೌಂಟ್ಸ್ ಲೋಯರ್(2)ರೆವಿನ್ಯೂ ಲೋಯರ್(3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು. ) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರಧಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ)ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದುಹಾಕಲಾಗುವು ದು.

04. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ, ಉದ್ಯೋಗ ಪಡೆದಿರುವು ದು ಕಂಡು ಬಂದಲ್ಲಿ ಅವರನ್ನು ಯಾವು ದೇ ಸಮಯದಲ್ಲಿ ಯಾವು ದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದು ಹಾಕಲಾಗುವುದು.

05. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ " ಸ್ವೀಕರಿಸತಕ್ಕದ್ದು.

06. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.

07. ಸರ್ಕಾರದ ಸುತ್ತೋಲೆ ಸಂ. ಕಂಇ 54 ಬಿಎಸ್‌ಸಿ 2007 ದಿನಾಂಕ 27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಟ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

08. ಅಭ್ಯರ್ಥಿಗಳು ಉದ್ಯೋಗ ವಿನಿಮಯ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂಧ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.

09. ಅಭ್ಯರ್ಥಿಗಳು ಕರ್ನಾಟಕ ನಾಗರಿಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರಿಕ ಸೇವಾ (ಸಿಸಿಎ)ನಿಯಮಾವಳಿ 1957 ಕರ್ನಾಟಕ ನಾಗರಿಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರಧಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.

10. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿಧ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವು ದು.

11. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವು ದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000-00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲೆಡ್ಜ್ ಮಾಡಿಕೊಳ್ಳತಕ್ಕದ್ದು.

12. ಅಭ್ಯರ್ಥಿಯು ಇಲಾಖೆಯಿಂಧ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.

13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.

14. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ- ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

15. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವು ಧೇ ಭತ್ಯೆಯನ್ನು ನೀಡಲಾಗುವು ದಿಲ್ಲ.

16. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆಧೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**ಕೆ.ಎಸ್.ಸತ್ಯಮೂರ್ತಿ**
ಜಿಲ್ಲಾಧಿಕಾರಿ, ತುಮಕೂರು.

**PR.9**
**SC.25**

## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಾರ್ಯಾಲಯ, ಮೈಸೂರು

**ಸಂಖ್ಯೆಃ ಆಡಳಿತ/ನೇಮಕಾತಿ(ಬೆನ)/ 1642 /2014 ಮೈಸೂರು, ದಿನಾಂಕ 04.02.2014.**

**ಅಧಿಸೂಚನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು ಘಟಕದಲ್ಲಿ ಖಾಲಿ ಇರುವ ಬೆರಳಚ್ಚು-ನಕಲುಗಾರರ ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಈ ಅಧಿಸೂಚನೆಯಲ್ಲಿ ನಿಗದಿಪಡಿಸಿ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ದಿನಾಂಕ **10.02.2014**ರಿಂದ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

ಅರ್ಜಿಗಳನ್ನು ಸಲ್ಲಿಸಲು ಕಡೆಯ ದಿನಾಂಕಃ **04.03.2014**ರ ಅಪರಾಹ್ನ **05.00** ಗಂಟೆ.

**ವಿಶೇಷ ಸೂಚನೆಃ**

1. ಅರ್ಜಿಗಳು ಕಡ್ಡಾಯವಾಗಿ ನಿಗದಿತ ನಮೂನೆಯಲ್ಲಿಯೇ ಇರಬೇಕು.
2. ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಚಾಲ್ತಿಯಲ್ಲಿರುವ ದೂರವಾಣಿ ಸಂಖ್ಯೆ ಹಾಗೂ **ಈ**-ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸಬೇಕು.

3. ಅರ್ಜಿ ನಮೂನೆಗಳನ್ನು ಈ ಕಛೇರಿಯಿಂದ ಮಾರಾಟ ಮಾಡಲಾಗುವುದಿಲ್ಲ. ಆದರೆ, ನಮೂನೆಯನ್ನು ಈ ಕಛೇರಿಯ ವೆಬ್‌ಸೈಟ್ **www.mys.distcourts.kar.nic.in** ಇಂದ ಪ್ರತಿ ಮಾಡಿಕೊಂಡು ಬಳಸಬಹುದು.

1. ಹುದ್ದೆಯ ಹೆಸರುಃ ಬೆರಳಚ್ಚು–ನಕಲುಗಾರರು

ಖಾಲಿ ಹುದ್ದೆಗಳು– 04

ವೇತನ ಶ್ರೇಣಿಃ : **11600-200-12000-250-13000-300-14200-350–15600-400–17200-450-19000–500–21000.**

**ಹುದ್ದೆಗಳ ವರ್ಗೀಕರಣಃ**

| ಮೀಸಲಾತಿ | ಇತರೆ | ಮಹಿಳೆ | ಗ್ರಾಮೀಣ | ಮಾ.ಸೈ | ಕ.ಮಾ.ಅ | ಯೋ.ನಿ.ಅ | ಅಂ.ಅ | ಒಟ್ಟು |
|---|---|---|---|---|---|---|---|---|
| II – ಎ | – | – | 01 | – | – | – | – | 01 |
| II – ಬಿ | – | 01 | – | – | – | – | – | 01 |
| ಸಾಮಾನ್ಯ | 01 | 01 | – | – | – | – | – | 02 |
| ಒಟ್ಟು | 01 | 02 | 01 | – | – | – | – | 04 |

**ವಿದ್ಯಾರ್ಹತೆಃ** ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆ ಮತ್ತು ಕರ್ನಾಟಕ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಮತ್ತು ಇಂಗ್ಲೀಷ್ ಎರಡೂ ಭಾಷೆಯಲ್ಲೂ ಕಿರಿಯ ಶ್ರೇಣಿಃ ಬೆರಳಚ್ಚು ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿರುವ ಕಡೆಯ ದಿನಾಂಕದೊಳಗೆ ಉತ್ತೀರ್ಣರಾಗಿರಬೇಕು.

**ಆಯ್ಕೆಯ ವಿಧಾನಃ** ಅರ್ಹತಾ ಪರೀಕ್ಷೆಗಳಲ್ಲಿ ಗಳಿಸಿರುವ ಒಟ್ಟು ಶೇಕಡಾವಾರು ಅಂಕಗಳು ಮತ್ತು 15 ನಿಮಿಷಗಳ ಉಕ್ತಲೇಖನದಲ್ಲಿ ಕೊಡುವ ವಿಷಯವನ್ನು ಬೆರಳಚ್ಚು ಮಾಡುವ ಅರ್ಹತಾ ಪರೀಕ್ಷೆಯಲ್ಲಿ ಗಳಿಸುವ ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸುವ ಅಂಕಗಳ ಆಧಾರದ ಮೇಲೆ ಆಯ್ಕೆ ಮಾಡಲಾಗುವುದು.

**ಟಿಪ್ಪಣಿಃ** : ಅರ್ಹತಾ ಪರೀಕ್ಷೆಯು ಗರಿಷ್ಠ 100 ಅಂಕಗಳನ್ನು ಒಳಗೊಂಡಿದ್ದು, ಅದರಲ್ಲಿ ತೇರ್ಗಡೆಯಾಗಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕು ಮತ್ತು ಸಂದರ್ಶನವು 05 ಅಂಕಗಳನ್ನೊಳಗೊಂಡಿರುತ್ತದೆ.

**ವಿಶೇಷ ಟಿಪ್ಪಣಿಃ** ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಲ್ಲಿ, ಮಹಿಳಾ ಅಭ್ಯರ್ಥಿಗಳು, ಮಾಜಿ ಸೈನಿಕ ಅಭ್ಯರ್ಥಿಗಳು, ಯೋಜನಾ ನಿರಾಶ್ರಿತ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಕನ್ನಡ ಮಾಧ್ಯಮ ಅಭ್ಯರ್ಥಿಗಳ ಮೀಸಲಾತಿಗಳಿಗೆ ಅರ್ಹ ಅಭ್ಯರ್ಥಿಗಳು ಲಭ್ಯವಿರದೇ ಇದ್ದ ಪಕ್ಷದಲ್ಲಿ, ಆ ಹುದ್ದೆಗಳನ್ನು ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು. ಆಯಾ ಪಂಗಡಗಳ ಇತರೆ ಅಭ್ಯರ್ಥಿಗಳೂ ಸಹ ಲಭ್ಯವಾಗದಿದ್ದಲ್ಲಿ, ಪರಿಶಿಷ್ಟ ಜಾತಿ ಹಾಗೂ ಪರಿಶಿಷ್ಟ ಪಂಗಡಗಳಿಗೆ ಮೀಸಲಾದ ಹುದ್ದೆಗಳನ್ನು ಹೊರತುಪಡಿಸಿ ಇನ್ನುಳಿದ ಹಿಂದುಳಿದ ವರ್ಗಗಳ ಹುದ್ದೆಗಳನ್ನು ಸಾಮಾನ್ಯ ವರ್ಗದ ಅಭ್ಯರ್ಥಿಗಳಿಂದ ಭರ್ತಿ ಮಾಡಲಾಗುವುದು.

ಅರ್ಹತಾ ಪರೀಕ್ಷೆಗೆ ಹಾಗೂ ಸಂದರ್ಶನಕ್ಕೆ ಆಯ್ಕೆಯಾಗುವ ಅಭ್ಯರ್ಥಿಗಳು ಮೈಸೂರು ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಕಛೇರಿಗೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗತಕ್ಕದ್ದು.

**ವಯೋಮಿತಿಃ**

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು

ಅ. ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು.

ಆ. ಗರಿಷ್ಠ ವಯೋಮಿತಿ

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ | 38 ವರ್ಷ |
| ಪ.ಜಾತಿ, ಪ.ಪಂಗಡ, ಪ್ರವರ್ಗ – 1 | 40 ವರ್ಷ |

ಅಭ್ಯರ್ಥಿಗಳು ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಗರಿಷ್ಠ ವಯಸ್ಸನ್ನು ಮೀರಿರಕೂಡದು.

**ವಯೋಮಿತಿ ಸಡಿಲಿಕೆಃ**

ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಆಯಾ ಅಭ್ಯರ್ಥಿಗಳಿಗೆ ನಮೂದಿಸಿರುವ ಮಟ್ಟಿಗೆ ಹೆಚ್ಚಿಸಲಾಗುವುದು.

1. ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವರು ಎಷ್ಟು ವರ್ಷಗಳ ಅವಧಿಗೆ ಹುದ್ದೆಯಲ್ಲಿ ಸೇವೆ ಸಲ್ಲಿಸಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೋ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ, ಎರಡರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳ ಸಡಿಲಿಕೆಯನ್ನು ನೀಡಲಾಗುವುದು.

2. ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ, ಅವನು ಸಶಸ್ತ್ರ ದಳಗಳಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವನೋ ಆ ವರ್ಷಗಳಿಗೆ 03 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.
3. ಅಭ್ಯರ್ಥಿಯು ಅಂಗವಿಕಲನಾಗಿದ್ದಲ್ಲಿ, ವಿಧವೆಯಾಗಿದ್ದಲ್ಲಿ ಮತ್ತು ಜೀತ ಕಾರ್ಮಿಕನಾಗಿದ್ದಲ್ಲಿ 10 ವರ್ಷಗಳು.
4. ಅಭ್ಯರ್ಥಿಯು ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದ ಪಕ್ಷದಲ್ಲಿ ಗರಿಷ್ಠ ವಯೋಮಿತಿಯನ್ನು ಅಭ್ಯರ್ಥಿಯು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೊ ಅಥವಾ ಹಿಂದೆ ಸೇವೆ ಸಲ್ಲಿಸಿದ್ದಾರೊ ಅಷ್ಟು ವರ್ಷಗಳ ಅಥವಾ 05 ವರ್ಷಗಳ ಅವಧಿ, ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.
5. ಅಭ್ಯರ್ಥಿಯು ನ್ಯಾಷನಲ್ ಕೆಡೆಟ್ ಕಾರ್ಪ್ಸ್‌ನಲ್ಲಿ ಪೂರ್ಣ ಕಾಲಿಕ ಪರೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಯಾಗಿದ್ದರೆ ಅಂತಹ ಕೆಡೆಟ್ ಪರೀಕ್ಷಕನಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.
6. ಅಭ್ಯರ್ಥಿಯು ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ಔದ್ಯಮೀಕರಣ ಯೋಜನೆಯ ಮೇರೆಗೆ ನೇಮಕಗೊಂಡು ಗ್ರಾಮಸಮೂಹ ಪರಿಶೀಲಕರಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಪಕ್ಷದಲ್ಲಿ ಅಂತಹ ಗ್ರಾಮ ಸಮೂಹ ಪರಿಶೀಲಕರಾಗಿ ಸೇವೆ ಸಲ್ಲಿಸಿದ್ದಷ್ಟು ವರ್ಷಗಳು.

**ಪರಿವೀಕ್ಷಣಾ ಅವಧಿಃ**

ಆಯ್ಕೆಯಾದ ಅಭ್ಯರ್ಥಿಗಳು ಕರ್ನಾಟಕ ಸೇವಾ ನಿಯಮ (ಪರಿವೀಕ್ಷಣೆ ನಿಯಮಗಳು) 1977ರ ಪ್ರಕಾರ 02 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿರುತ್ತಾರೆ. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ, ಕನ್ನಡ ಭಾಷಾ ಪರೀಕ್ಷೆಯಲ್ಲಿ ಮತ್ತು ಕಂಪ್ಯೂಟರ್ ಸಾಕ್ಷರತಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ವಿಧಾನಃ**

ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣಪತ್ರವನ್ನು ಪಡೆದು, ಅರ್ಜಿಗಳನ್ನು ಸಂಬಂಧಿತ ನೇಮಕಾತಿ ಪ್ರಾಧಿಕಾರದ ಮೂಲಕ ಕಳುಹಿಸಬೇಕು.

**ಅರ್ಜಿ ಸಲ್ಲಿಸುವ ವಿಧಾನಃ**

ಈ ಪ್ರಕಟಣೆಯಲ್ಲಿ ಲಗತ್ತಿಸಿರುವ ಅರ್ಜಿ ನಮೂನೆಯನ್ನು ಬೆರಳಚ್ಚು ಮಾಡಿ / ಕಂಪ್ಯೂಟರ್ ಮೂಲಕ ತಯಾರಿಸಿ, ಅರ್ಜಿಯನ್ನು ತಮ್ಮ ಸ್ವಂತ ಕೈಬರಹದಲ್ಲಿ ತಮಗೆ ಅನ್ವಯಿಸುವ ಎಲ್ಲಾ ಅಂಕಣಗಳನ್ನು ಭರ್ತಿ ಮಾಡುವುದು. ಅಭ್ಯರ್ಥಿಯು ತನ್ನ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ಅರ್ಜಿಯ ಮೇಲೆ ಅಂಟಿಸಿ, ಅದರ ಮೇಲೂ ಸಹ ಸಹಿ ಮಾಡುವುದು ಹಾಗೂ ಅರ್ಜಿ ನಮೂನೆಯ ಕೊನೆಯಲ್ಲಿ ಘೋಷಣೆಯ ನಂತರ ಸಹಿ ಮಾಡುವುದು. ಹುದ್ದೆಗೆ ಸಂಬಂಧಿಸಿದ ವಿದ್ಯಾರ್ಹತೆ, ವಯಸ್ಸು ಮತ್ತು ಕೋರಿರುವ ಮೀಸಲಾತಿಗೆ ಸಂಬಂಧಿಸಿದಂತೆ ಪ್ರಮಾಣ ಪತ್ರಗಳನ್ನು ಅಧಿಕೃತ ಅಧಿಕಾರಿಗಳಿಂದ ಪಡೆದು, ಅವುಗಳ ನಕಲುಗಳನ್ನು ಸ್ವಯಂ ದೃಢೀಕರಿಸಿ ಅರ್ಜಿಯೊಂದಿಗೆ ಲಗತ್ತಿಸಿ ಅರ್ಜಿಯನ್ನು **"ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಮೈಸೂರು – 570 005"**, ಇವರಿಗೆ ದಿನಾಂಕಃ 04.03.2014ರ ಅಪರಾಹ್ನ 05.00 ಗಂಟೆಯೊಳಗೆ ತಲುಪುವಂತೆ ಕಳುಹಿಸುವುದು. ಅರ್ಜಿಯನ್ನು ಕಳುಹಿಸುವ ಲಕೋಟೆ ಮೇಲೆ ಅಭ್ಯರ್ಥಿಯು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಾನೆ ಎಂಬುದರ ಬಗ್ಗೆ ಹುದ್ದೆಯ ಹೆಸರನ್ನು ನಮೂದಿಸುವುದು.

**ಅಭ್ಯರ್ಥಿಗಳು ಅರ್ಜಿಯೊಂದಿಗೆ ಲಗತ್ತಿಸಬೇಕಾದ ದಾಖಲಾತಿಗಳುಃ**

ಅಭ್ಯರ್ಥಿಗಳು ಈ ಕೆಳಕಂಡ ದಾಖಲಾತಿಗಳ ಸ್ವಯಂ ದೃಢೀಕರಿಸಿದ ಒಂದು ಪ್ರತಿಯನ್ನು ಅರ್ಜಿಯೊಂದಿಗೆ ಲಗತ್ತಿಸಬೇಕು. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಪರಿಗಣಿಸಲಾಗುವುದಿಲ್ಲ. ಸ್ವಯಂ ದೃಢೀಕರಿಸಿರದ ಲಗತ್ತುಗಳನ್ನು ಹೊರತುಪಡಿಸಿದರೂ ಸಹ ಅಭ್ಯರ್ಥಿಯ ಅರ್ಜಿಯು ಸಿಂಧುವಾಗುವಂತಿದ್ದಲ್ಲಿ ಮಾತ್ರ ಅಂತಹ ಅರ್ಜಿಗಳನ್ನು ಪುರಸ್ಕರಿಸಲಾಗುವುದು, ಇಲ್ಲದಿದ್ದಲ್ಲಿ ತಿರಸ್ಕರಿಸಲಾಗುವುದು.

1. ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರವನ್ನು ನಿಗದಿತ ಸ್ಥಳದಲ್ಲಿ ಅಂಟಿಸಿರಬೇಕು.
2. ಜನ್ಮ ದಿನಾಂಕದ ದೃಢೀಕರಣಕ್ಕಾಗಿ ಎಸ್‌ಎಸ್‌ಎಲ್‌ಸಿ ಅಂಕ ಪಟ್ಟಿ / ಕ್ಯುಮುಲೇಟಿವ್ ರೆಕಾರ್ಡ್ / ಇನ್ನಾವುದೇ ಅಧಿಕೃತ ದಾಖಲಾತಿಗಳು.
3. ವಿದ್ಯಾರ್ಹತೆಯ ಬಗ್ಗೆ ಅಂಕಪಟ್ಟಿಗಳು.
4. ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಅಭ್ಯರ್ಥಿಗಳು ನಮೂನೆ 'ಡಿ' ಯಲ್ಲಿ, ಪ್ರವರ್ಗ–1ರ ಅಭ್ಯರ್ಥಿಗಳು ನಮೂನೆ 'ಇ' ಯಲ್ಲಿ ಮತ್ತು 2ಎ, 2ಬಿ, 3ಎ ಮತ್ತು 3ಬಿ ಗೆ ಸೇರಿದ ಅಭ್ಯರ್ಥಿಗಳು ನಮೂನೆ 'ಎಫ್'ನಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು.
5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃಸಿಆಸುಇ/96/ಸೇನನಿ/2005, ದಿನಾಂಕಃ 10.08.2005ರ ಪ್ರಕಾರ ನಿಗದಿತ ನಮೂನೆ – 2ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲು ಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹರಾಗುತ್ತಾರೆ.

6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ – 2ರ ಜೊತೆ ನಮೂನೆ – 1ರಲ್ಲೂ ದೃಢೀಕರಣ ಪತ್ರವನ್ನು ಸಲ್ಲಿಸುವುದು.
7. ಕನ್ನಡ ಮಾಧ್ಯಮ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ನಿಗದಿತ ನಮೂನೆಯಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಮತ್ತು ಮೊಹರಿನೊಂದಿಗೆ ಕನ್ನಡ ಮಾಧ್ಯಮ ವ್ಯಾಸಂಗ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸುವುದು.
8. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ:ಸಿಆಸುಇ/115/ಸೇಅನಿ/2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸಬೇಕು.
9. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ/44/ಸೇಅನಿ/2001ರ ದಿನಾಂಕ 27.07.2001ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.
10. ಮಾಜಿ ಸೈನಿಕ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸೈನಿಕ ಸೇವೆಯಿಂದ ಬಿಡುಗಡೆಯಾದ / ವಿಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರವನ್ನು ಸಲ್ಲಿಸುವುದು.
11. ವಿಧವೆಯರು, ಜೀತ ಕಾರ್ಮಿಕರು ಹಾಗೂ ವಯೋಮಿತಿ ರಿಯಾಯಿತಿಗೆ ಅರ್ಹರಾದ ಇನ್ನಿತರರು ವಯೋಮಿತಿ ರಿಯಾಯಿತಿ ಕೋರಲು ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರವನ್ನು ಸಲ್ಲಿಸುವುದು.
12. ಸ್ವಯಂ ವಿಳಾಸವಿರುವ ರೂ.5/– ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಅರ್ಜಿಯೊಂದಿಗೆ ಲಗತ್ತಿಸುವುದು.

**ವಿಶೇಷ ಸೂಚನೆ:**

ಅರ್ಜಿಯೊಂದಿಗೆ ಲಗತ್ತಿಸುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಲಗತ್ತಿಸಿರಬೇಕು ಹಾಗೂ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು ಮತ್ತು ಕಡ್ಡಾಯವಾಗಿ ಸ್ವಯಂ ದೃಢೀಕರಿಸಿರಬೇಕು.

ಯಾವುದೇ ಅಭ್ಯರ್ಥಿಯು ಸರ್ಕಾರಿ/ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿತ್ವದ ಬಗ್ಗೆ ಪ್ರಭಾವ ಬೀರಿದರೆ ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯುವುದು ಮತ್ತು ಈ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆಯಾಗಿದ್ದರೆ ಮುಂದಿನ ಕಛೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯುವುದು.

**ಕೆ.ಎಸ್. ಮುದಗಲ್**

ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಮೈಸೂರು.

**ಅರ್ಜಿ ನಮೂನೆ**

**ಅಭ್ಯರ್ಥಿಯ ಇತ್ತೀಚಿನ ಪಾಸ್‌ಪೋರ್ಟ್ ಅಳತೆಯ ಭಾವಚಿತ್ರದ ಮೇಲೆ ಸಹಿ ಮಾಡಿ ಅಂಟಿಸುವುದು.**

**ರವರಿಗೆ**

**ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,**

**ಮೈಸೂರು.**

ದಿನಾಂಕ: 04.02.2014ರ ತಮ್ಮ ಕಛೇರಿಯ ಅಧಿಸೂಚನೆ ಸಂಖ್ಯೆ ಆಡಳಿತ/ನೇಮಕಾತಿ(ಬೆನ)/ 1642 /2014ರ ಮೇರೆಗೆ ನಾನು ಬೆರಳಚ್ಚು–ನಕಲುಗಾರರ ಹುದ್ದೆಗೆ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ ಮತ್ತು ಈ ಕೆಳಕಂಡ ಮಾಹಿತಿಯನ್ನು ಒದಗಿಸುತ್ತಿದ್ದೇನೆ.

| | | | | |
|---|---|---|---|---|
| 1 | ಅಭ್ಯರ್ಥಿಯ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2 | ತಂದೆ / ಗಂಡನ ಹೆಸರು | | | |
| 3 | ತಾಯಿಯ ಹೆಸರು | | | |
| 4 | ಜನ್ಮ ದಿನಾಂಕ | | | |
| 5 | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳುಗಳು | ದಿನಗಳು |
| | | | | |

<table>
<tr><td rowspan="2">6</td><td rowspan="2">ಲಿಂಗ</td><td colspan="3">ಪುರುಷ</td><td colspan="2">ಮಹಿಳೆ</td></tr>
<tr><td colspan="3"></td><td colspan="2"></td></tr>
<tr><td>7</td><td>ರಾಷ್ಟ್ರೀಯತೆ</td><td colspan="5"></td></tr>
<tr><td>8</td><td>ಧರ್ಮ ಮತ್ತು ಜಾತಿ</td><td colspan="5"></td></tr>
<tr><td rowspan="2">9</td><td rowspan="2">ವೈವಾಹಿಕ ಸ್ಥಿತಿ</td><td colspan="3">ವಿವಾಹಿತ</td><td colspan="2">ಅವಿವಾಹಿತ</td></tr>
<tr><td colspan="3"></td><td colspan="2"></td></tr>
<tr><td>10</td><td>ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ?</td><td colspan="5"></td></tr>
<tr><td rowspan="2">11</td><td rowspan="2">ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ?</td><td colspan="2">ಹೌದು</td><td colspan="3">ಇಲ್ಲ</td></tr>
<tr><td colspan="2"></td><td colspan="3"></td></tr>
<tr><td rowspan="2">12</td><td rowspan="2">ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ?</td><td colspan="2">ಹೌದು</td><td colspan="3">ಇಲ್ಲ</td></tr>
<tr><td colspan="2"></td><td colspan="3"></td></tr>
<tr><td rowspan="4">13</td><td rowspan="4">ಕೋರುವ ಮೀಸಲಾತಿಗಳು<br>(ಕೋರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td>ಸಾಮಾನ್ಯ</td><td>ಪ.ಜಾತಿ</td><td colspan="2">ಪ.ಪಂಗಡ</td><td>ಪ್ರವರ್ಗ–1</td></tr>
<tr><td></td><td></td><td colspan="2"></td><td></td></tr>
<tr><td>2ಎ</td><td>2ಬಿ</td><td colspan="2">3ಎ</td><td>3ಬಿ</td></tr>
<tr><td></td><td></td><td colspan="2"></td><td></td></tr>
<tr><td rowspan="2">14</td><td rowspan="2">ನೀವು ಈ ಯಾವುದಾದರು ಮೀಸಲಾತಿ ಅಡಿಯಲ್ಲಿ ಬರುತ್ತೀರ?<br>(ಸೇರುವ ಮೀಸಲಾತಿಯನ್ನು ✔ ಚಿಹ್ನೆ ಹಾಕುವುದರ ಮೂಲಕ ಗುರುತಿಸಿ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸಬೇಕು)</td><td>ಗ್ರಾಮೀಣ</td><td>ಕ.ಮಾ.ಅ</td><td>ಮಾ.ಸೈ</td><td>ಯೋ.ನಿ.ಅ.</td><td>ಅಂ.ವಿ</td></tr>
<tr><td></td><td></td><td></td><td></td><td></td></tr>
<tr><td rowspan="4">15</td><td><u>ವಿದ್ಯಾರ್ಹತೆ:</u><br>(ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು)</td><td colspan="2">ತೇರ್ಗಡೆಯಾದ ತಿಂಗಳು ಮತ್ತು ವರ್ಷ</td><td colspan="2">ಗರಿಷ್ಠ ಅಂಕಗಳು</td><td>ಗಳಿಸಿದ ಅಂಕಗಳು</td></tr>
<tr><td>ಎಸ್. ಎಸ್. ಎಲ್. ಸಿ.</td><td colspan="2"></td><td colspan="2"></td><td></td></tr>
<tr><td>ಕನ್ನಡ ಬೆರಳಚ್ಚು (ಕಿರಿಯ ಶ್ರೇಣಿ)</td><td colspan="2"></td><td colspan="2"></td><td></td></tr>
<tr><td>ಆಂಗ್ಲ ಬೆರಳಚ್ಚು (ಕಿರಿಯ ಶ್ರೇಣಿ)</td><td colspan="2"></td><td colspan="2"></td><td></td></tr>
<tr><td rowspan="2">16</td><td rowspan="2">ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರಾ?</td><td colspan="2">ಹೌದು</td><td colspan="3">ಇಲ್ಲ</td></tr>
<tr><td colspan="2"></td><td colspan="3"></td></tr>
<tr><td rowspan="2">17</td><td rowspan="2">ನೀವು ಪ್ರಸ್ತುತ ಸರ್ಕಾರಿ ಸೇವೆಯಲ್ಲಿದ್ದಲ್ಲಿ, ನೇಮಕಾತಿ ಪ್ರಾಧಿಕಾರದಿಂದ ಪಡೆದ ನಿರಾಕ್ಷೇಪಣ ಪತ್ರದ ನಕಲನ್ನು ಲಗತ್ತಿಸಿದ್ದೀರಾ?</td><td colspan="2">ಹೌದು</td><td colspan="3">ಇಲ್ಲ</td></tr>
<tr><td colspan="2"></td><td colspan="3"></td></tr>
<tr><td>18</td><td>ಅಭ್ಯರ್ಥಿಯ ಖಾಯಂ ವಿಳಾಸ, ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ.</td><td colspan="5"></td></tr>
<tr><td>19</td><td>ಅಭ್ಯರ್ಥಿಯ ಅಂಚೆ ವಿಳಾಸ ಮತ್ತು ದೂರವಾಣಿ ಸಂಖ್ಯೆ ಹಾಗೂ ಈ–ಮೇಲ್ ಐಡಿ.</td><td colspan="5"></td></tr>
<tr><td>20</td><td>ನಿಮ್ಮ ಸ್ವವಿಳಾಸವಿರುವ ರೂ.5/–ರ ಅಂಚೆ ಚೀಟಿ ಅಂಟಿಸಿರುವ ಲಕೋಟೆಯನ್ನು ಲಗತ್ತಿಸಿದ್ದೀರಾ?</td><td colspan="5"></td></tr>
</table>

ಈ ಮೇಲ್ಕಂಡ ಮಾಹಿತಿಗಳು ಸತ್ಯವಾಗಿರುತ್ತದೆ ಎಂದು ಪ್ರಮಾಣೀಕರಿಸುತ್ತೇನೆ ಹಾಗೂ ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತ್ವವನ್ನು ರದ್ದುಪಡಿಸಬಹುದೆಂದು ಘೋಷಿಸುತ್ತೇನೆ.

**ಅಭ್ಯರ್ಥಿಯ ಸಹಿ**

**ಸ್ಥಳ:**

**ದಿನಾಂಕ:**

**PR.14**
**SC.10**

**ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ ಚಾಮರಾಜನಗರ**

**ಸಂಖ್ಯೆ:ಎಡಿಎಮ್ಎನ್/360/2014. ಚಾಮರಾಜನಗರ, ದಿನಾಂಕ: 31.01.2014.**

**ತಿದ್ದುಪಡಿ**

**ವಿಷಯ:** ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ 5 ಬ್ಯಾಕ್‌ಲಾಗ್ ಹುದ್ದೆಗಳು, ಆದೇಶಜಾರಿಕಾರರ 1 ಹುದ್ದೆ ಮತ್ತು ಸೇವಕರ 1 ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ:**
1. ಈ ಕಛೇರಿ ಅಧಿಸೂಚನೆ ಸಂಖ್ಯೆ:ಎಡಿಎಮ್ಎನ್ /93/2014 ದಿ.07.01.2014.
2. ಗೌರವಾನ್ವಿತ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ:LCA–II.128/ 2012 ದಿನಾಂಕ 08.01.2014 ರೊಡನೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 18 SCR 2013 ದಿನಾಂಕ 13.12.2013.
3. ಗೌರವಾನ್ವಿತ ಉಚ್ಚ ನ್ಯಾಯಾಲಯದ ಪತ್ರ ಸಂಖ್ಯೆ: LCA-III G.O. 32/2014 ದಿನಾಂಕ 20.01.2014 ರೊಡನೆ ಲಗತ್ತಿಸಿರುವ ಕರ್ನಾಟಕ ಸರ್ಕಾರದ ಅಧಿಸೂಚನೆ ಸಂಖ್ಯೆ: DPAR 30 SRR 2013 ದಿನಾಂಕ 06.01.2014.
4. ದಿನಾಂಕ 30.01.2014ರ ಈ ಕಛೇರಿ ಟಿಪ್ಪಣಿ ಮೇಲಿನ ಆದೇಶ.

ಉಲ್ಲೇಖ –2 ಮತ್ತು 3ರ, ಕರ್ನಾಟಕ ಸರ್ಕಾರದ ಅಧಿಸೂಚನೆಯಲ್ಲಿ, ನಿಗದಿಪಡಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯಂತೆ, ಉಲ್ಲೇಖ –1ರ, ಈ ಕಛೇರಿ ಅಧಿಸೂಚನೆಯಲ್ಲಿ ಪ್ರಕಟಿಸಲಾಗಿರುವ ಹುದ್ದೆಗಳಲ್ಲಿನ, ಶೈಕ್ಷಣಿಕ ವಿದ್ಯಾರ್ಹತೆಯನ್ನು ಈ ಕೆಳಕಂಡಂತೆ ನಿಗದಿಪಡಿಸಲಾಗಿದೆ.

1. **ಶೀಘ್ರಲಿಪಿಗಾರರ ಮತ್ತು ಆದೇಶ ಜಾರಿಕಾರರ ಹುದ್ದೆಗಳಿಗೆ :** S.S.L.C. ಅಥವಾ ತತ್ಸಮಾನ ವಿದ್ಯಾರ್ಹತೆಗೆ ಬದಲಾಗಿ "ಪದವಿ ಪೂರ್ವ ಶಿಕ್ಷಣ ಪರೀಕ್ಷೆ ಅಥವಾ ತತ್ಸಮಾನ ವಿದ್ಯಾರ್ಹತೆ" ಯನ್ನು ನಿಗದಿಪಡಿಸಲಾಗಿರುತ್ತದೆ. ಉಳಿದಂತೆ, ಇತರೆ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.
2. **ಸೇವಕರ ಹುದ್ದೆಗೆ :** 7ನೇ ತರಗತಿ ವಿದ್ಯಾರ್ಹತೆಗೆ ಬದಲಾಗಿ "ಹತ್ತನೇ ತರಗತಿ ಅಥವಾ ತತ್ಸಮಾನ ವಿದ್ಯಾರ್ಹತೆ " ಯನ್ನು ನಿಗದಿಪಡಿಸಲಾಗಿರುತ್ತದೆ. ಉಳಿದಂತೆ, ಇತರೆ ಶೈಕ್ಷಣಿಕ ವಿದ್ಯಾರ್ಹತೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

ಅರ್ಜಿ ಸ್ವೀಕರಿಸಲು ಕಾಲಾವಕಾಶವನ್ನು ದಿನಾಂಕ **22.02.2014ರ** ವರೆಗೆ ವಿಸ್ತರಿಸಲಾಗಿದೆ.

ಉಲ್ಲೇಖ –1ರ ಈ ಕಛೇರಿ ಅಧಿಸೂಚನೆ ಮೇರೆಗೆ, ಈಗಾಗಲೇ ಅರ್ಜಿಯನ್ನು ಸಲ್ಲಿಸಿರುವ ಅಭ್ಯರ್ಥಿಗಳು ಮತ್ತು ಹೊಸದಾಗಿ ಅರ್ಜಿ ಸಲ್ಲಿಸುವವರು, ಈ ತಿದ್ದುಪಡಿಯೊಡನೆ ಲಗತ್ತಿಸಿರುವ ಅರ್ಜಿ ನಮೂನೆಯಲ್ಲಿ ಮೇಲೆ ತಿಳಿಸಿರುವ ಶೈಕ್ಷಣಿಕ ವಿದ್ಯಾರ್ಹತೆಯ ದಾಖಲೆಗಳೊಡನೆ ಅರ್ಜಿಯನ್ನು ಸಲ್ಲಿಸುವುದು. ಉಳಿದಂತೆ ಉಲ್ಲೇಖ–1ರ ದಿನಾಂಕ 07.01.2014ರ ಈ ಕಛೇರಿ ಅಧಿಸೂಚನೆಯಲ್ಲಿ ಯಾವುದೇ ಬದಲಾವಣೆ ಇರುವುದಿಲ್ಲ.

**ವಿ.ಜಿ. ಸಾವಡ್ಕರ್**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ.

**ಅರ್ಜಿ ನಮೂನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ.
ಮಾನ್ಯರೇ,

ಇತ್ತೀಚಿನ ಭಾವಚಿತ್ರ ಲಗತ್ತಿಸಿ ಸಹಿ ಮಾಡುವುದು

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ: ಎಡಿಎಂಎನ್/ 93/2014 ದಿನಾಂಕ 07.01.2014ರ ಮತ್ತು 31.01.2014ರ ತಿದ್ದುಪಡಿ ಪ್ರಕಟಣೆ ಪ್ರಕಾರ ಶೀಘ್ರಲಿಪಿಗಾರರ /ಆದೇಶ ಜಾರೀಕಾರರ / ಸೇವಕರ, (ಯಾವ ಹುದ್ದೆಗೆ ಎಂದು ಸ್ಪಷ್ಟವಾಗಿ ಗುರುತು ಮಾಡುವುದು) ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | |
|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು<br>ಅಂಕಪಟ್ಟಿಯಲ್ಲಿರುವಂತೆ | |
| 2 | ತಂದೆಯ / ತಾಯಿಯ / ಗಂಡನ ಹೆಸರು | |
| 3 | ಪೂರ್ಣ ವಿಳಾಸ, ದೂರವಾಣಿ / ಮೊಬೈಲ್ ಸಂಖ್ಯೆಯೊಂದಿಗೆ: | |
| 4 | ಜನ್ಮ ದಿನಾಂಕ :<br>ವಯಸ್ಸು : | |
| 5 | ಲಿಂಗ | ಪುರುಷ / ಮಹಿಳೆ |
| 6 | ಕೋರಿರುವ ಮೀಸಲಾತಿ : | |
| 7 | ವಯೋಮಿತಿ ಸಡಿಲಿಕೆ ಅಪೇಕ್ಷಿಸಿದ್ದಲ್ಲಿ<br>ಹಾಜರುಪಡಿಸಿರುವ ದಾಖಲೆ : | |

| | | | | | |
|---|---|---|---|---|---|
| 8 | ರಾಷ್ಟ್ರೀಯತೆ ಃ<br>ಧರ್ಮ ಃ | | | | |
| 9 | ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರೆ? ಇದ್ದಲ್ಲಿ, ವಿವರಣೆ (ಇಲಾಖೆಯ ಹೆಸರು, ಹುದ್ದೆಯ ಪದನಾಮ, ಸೇವಾ ಅವಧಿ) | | | | |
| 10 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು ಃ ( ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆಃ | ಗರಿಷ್ಠ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | |
| ಬಿ | ಪಿ.ಯು.ಸಿ ಅಥವಾ ತತ್ಸಮಾನ ಪರೀಕ್ಷೆ | | | | |
| ಸಿ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಇ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಎಫ್ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| 11 | ವಾಹನ ಪರವಾನಗಿ ಹೊಂದಿದ್ದಲ್ಲಿ ಅದರ ವಿವರ (ಆದೇಶ ಜಾರೀಕಾರರ ಹುದ್ದೆಗೆ ಅರ್ಜಿ ಸಲ್ಲಿಸುವವರಿಗೆ ಮಾತ್ರ) | | | | |
| 12 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | | | | |
| 13 | ಸಲ್ಲಿಸಲು ಇಚ್ಛೆ ಪಡುವ ಇತರ ಯಾವುದಾದರೂ ವಿವರಗಳು | | | | |

ಸೂಚನೆ ಃ ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು "ಅನ್ವಯಿಸುವುದಿಲ್ಲ" ಎಂದು ನಮೂದಿಸುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ಧನಿದ್ದೇನೆ / ಸಿದ್ಧಳಿದ್ದೇನೆ.

ಸ್ಥಳ ಃ

ದಿನಾಂಕ ಃ ಅಭ್ಯರ್ಥಿಯ ಸಹಿ

**PR.15**

**IN THE COURT OF THE CITY CIVIL JUDGE AT BANGALORE**

**P and S.C. No. 25003/2014,**

**BETWEEN:**

1. Selvi Bosco, Wife of Late.S. John Bosco,

Aged about 49 years,

Residing at No.3, Old.No.6/69, Hennur Main Road,

Lingarajapuram, Bangalore-560084.

2. Samuel Bosco, Son of. Late S. John Bosco,

Aged about 22 years,

Residing at No.3, Old.No.6/69, Hennur Main Road,

Lingarajapuram, Bangalore-560084. - Petitioners

AND

N.I.L. ' - Respondents

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



**PUBLIC NOTICE**

Notice is hereby given that a petition has been made to this Court under Sections 371 & 372 of the Indian Succession Act, 1925 for the grant of Succession Certificate in respect of the services Benefits of late John Bosco who was working in MEG as Havlidar and subsequently retired and died on, 08/09/2013 who was **Residing at No.3, Old.No.6/69, Hennur Main Road, Lingarajapuram, Bangalore-560084,** India. Be it know that no caveat has been entered and the said petition is posted for hearing on 03/04/2014 at 11 a.m in the Court of the IV additional City Civil & Sessions Judge, Mayo Hall Bangalore (CCH-21). Any person(s)c1aming to have any interest may appear before the court on the above mentioned day either in person or through a pleader before grant of a Succession Certificate in favour of the Petitioners.

Given under my hand and seal of the Court on this the 30th day of January, 2014

By Order of the Court,
Assistant Registrar,
City Civil Court, Mayo Hall Unit, Bangalore

**PD 08**
**SC 5**

**ನಮೂನೆ-1**

**(ನಿಯಮ 9ನ್ನು ನೋಡಿ)**

**ಜಿಲ್ಲಾ ಪೊಲೀಸ್ ಕಾರ್ಯಾಲಯ, ಚಾಮರಾಜನಗರ ಜಿಲ್ಲೆ, ಚಾಮರಾಜನಗರ**

**ಅಧಿಸೂಚನೆ ದಿನಾಂಕ : 31-07-2013**

ಶ್ರೀ/ಶ್ರೀಮತಿ **ಜೇರಿಲ್ ಲೂವೀಸ್,** ಎ.ಹೆಚ್.ಸಿ-57, ಜಿಲ್ಲಾ ಸಶಸ್ತ್ರ ಮೀಸಲು ಪೊಲೀಸ್ (ಡಿ.ಎ.ಆರ್.) ಜಿಲ್ಲಾ ಪೊಲೀಸ್ ಕಛೇರಿ, ಚಾಮರಾಜನಗರ ಜಿಲ್ಲೆ, ಇಲ್ಲಿ ಕಾರ್ಯ ನಿರ್ವಹಿಸುತ್ತಿರುವ ಇವರ ಹೆಸರನ್ನು **ಜೇರಿಲ್ ಲೂವೀಸ್** ನಿಂದ **ಜೆರಾಲ್ಡ್ ಲೂವೀಸ್** ಎಂದು ಬದಲಾವಣೆಗೆ ಅನುಮತಿ ನೀಡಲಾಗಿದೆ.

**PD C/n. 20**
**SC - 10**

**ಪೊಲೀಸ್ ಸೂಪರಿಂಟೆಂಡೆಂಟ್,**
**ಚಾಮರಾಜನಗರ ಜಿಲ್ಲೆ**

## FORM-I

**(See Rule 9)**

**EDUCATION DEPARTMENT**

**NOTIFICATION**

Sri **SHANKAR S/O VAIJU KAMBLE** Working as Headmaster in the M.H.P.S. Golyali, Tal.: Khanapur Dist. Belgaum, Education Department of office of B.E.O. office Khanapur is permitted to change his Surname to **SHANKAR S/O. VAIJU BENNALKAR.**

**PD C/n. 21**
**SC - 10**

**Deputy Director,**
**Public Instructions Department, Belgaum (South)**

## FORM-I

**(See Rule 9)**

**OFFICE OF THE SUPERINTENDENT OF POLICE, BIJAPUR**

**NOTIFICATION, Dated: 03-02-2014**

Sri **MALAKARI BALADANDI,** Working as Deputy Superintendent of Police, in the Police Department of Office of The Superintendent of Police, Bijapur District is permitted to change his name to **MALLIKARJUN BALADANDI.**

**PD C/n. 22**
**SC - 10**

**Superintendent of Police,**
**Bijapur**

## FORM-I

**(See Rule 9)**

**OFFICE OF THE ADDITIONAL DIRECTOR GENERAL OF POLICE,**

**State Intelligence, Nrupathunga Road, Bangalore**

**NOTIFICATION, Dated: 30-01-2014**

**SMT. KUSUMABAI S. MELLANNAVAR** Working as Stenographer in the Police Department of Office of The Superintendent of Police, Intelligence, Belgaum is permitted to change her name to **SMT. KUSUMA SUNIL TORGAL.**

**PD C/n. 23**
**SC - 10**

**Deputy Inspector General of Police,**
**State Intelligence, Bangalore**

*ಮುದ್ರಕರು ಹಾಗೂ ಪ್ರಕಾಶಕರು:-* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು-59